# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 501 |
| ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 10.03.2020 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು. |

********

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಡಿಕೇರಿ ನಗರ ಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ಕೆಲಸದ ಕಾಮಗಾರಿಯನ್ನು ಕೈಗೊಳ್ಳಲಾಗಿದೆಯೇ; ಹಾಗಿದ್ದಲ್ಲಿ, ಯಾವಾಗ ಈ ಕಾಮಗಾರಿ ಪ್ರಾರಂಭವಾಗಿದೆ; (ವಿವರ ನೀಡುವುದು) | ಹೌದು<br>ಮಡಿಕೇರಿ ನಗರಕ್ಕೆ ಒಳಚರಂಡಿ ಕಲ್ಪಿಸುವ ಯೋಜನೆಯ ಕಾಮಗಾರಿಗಳನ್ನು ದಿನಾಂಕ:03-11-2015 ರಿಂದ ಪ್ರಾರಂಭಿಸಲಾಗಿರುತ್ತದೆ. |
| (ಆ) | ಈ ಕಾಮಗಾರಿಯ ಅಂದಾಜು ವೆಚ್ಚ ಎಷ್ಟು; ಬಿಡುಗಡೆಯಾಗಿರುವ ಅನುದಾನ ಎಷ್ಟು; ಕಾಮಗಾರಿ ಪಡೆದಿರುವ ಟೆಂಡರ್‌ದಾರರು ಯಾರು; ವಿವರ ನೀಡುವುದು) | ಈ ಯೋಜನೆಯ ಅಂದಾಜು ವೆಚ್ಚ ರೂ. 49.56 ಕೋಟಿಗಳು<br>ಬಿಡುಗಡೆಯಾಗಿರುವ ಅನುದಾನ: ರೂ. 32.43 ಕೋಟಿಗಳು<br>ಕಾಮಗಾರಿ ಪಡೆದಿರುವ ಟೆಂಡರ್‌ದಾರರ ವಿವರ ಈ ಕೆಳಕಂಡಂತಿದೆ;<br>1) **ಪ್ಯಾಕೇಜ್-1:** ಮಡಿಕೇರಿ ನಗರದಲ್ಲಿ ಒಳಚರಂಡಿ ಯೋಜನೆಯಡಿ ಸೀವರ್ ಕೊಳವೆ, ಏರು ಕೊಳವೆ ಹಾಗೂ ಔಟ್-ಫಾಲ್ ಕೊಳವೆ ಮಾರ್ಗಗಳ ಅಳವಡಿಕೆ, ಒಳಚರಂಡಿ ಗೃಹ ಸಂಪರ್ಕ ಕಲ್ಪಿಸುವುದು, ಮ್ಯಾನ್‌ಹೋಲ್, ವೆಟ್‌ವೆಲ್ ಹಾಗೂ ಸೆಪ್ಟಿಕ್ ಟ್ಯಾಂಕ್‌ಗಳ ನಿರ್ಮಾಣ ಕಾಮಗಾರಿಯನ್ನು ಮೆ॥ಎಲ್.ಸಿ ಇನ್‌ಫ್ರಾ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್, ಅಹಮದಾಬಾದ್ (ಹಿಂದೆ ಮೆ॥ ಲಕ್ಷ್ಮಿ ಕನ್ಸ್‌ಟ್ರಕ್ಷನ್ಸ್, ಅಹಮದಾಬಾದ್) ರವರಿಗೆ ವಹಿಸಲಾಗಿರುತ್ತದೆ.<br>2) **ಪ್ಯಾಕೇಜ್-2:** ದಿನಂಪ್ರತಿ 3 ಘನ ಮೀಟರ್ ಸಾಮರ್ಥ್ಯದ ಎಫ್.ಎಸ್.ಎಸ್.ಎಂ (Faecal Sludge Sanitation Management) ತಾಂತ್ರಿಕತೆಯ ತ್ಯಾಜ್ಯ ನೀರು ಶುದ್ಧೀಕರಣ ಘಟಕ ನಿರ್ಮಾಣ ಕಾಮಗಾರಿಯನ್ನು ಮೆ॥ ಸುಧನ್ವ ಇಂಜಿನಿಯರ್ಸ್ ಮತ್ತು ಬಿಲ್ಡರ್ಸ್, ಬೆಂಗಳೂರು ರವರಿಗೆ ವಹಿಸಲಾಗಿದೆ.<br>3) **ಪ್ಯಾಕೇಜ್-3:** ದಿನಂಪ್ರತಿ 3 ದಶಲಕ್ಷ ಲೀಟರ್ ಸಾಮರ್ಥ್ಯದ ಎಸ್.ಬಿ.ಟಿ (Soil Bio Technology) ತಾಂತ್ರಿಕತೆಯ ತ್ಯಾಜ್ಯ ನೀರು ಶುದ್ಧೀಕರಣ ಘಟಕ ನಿರ್ಮಾಣ ಕಾಮಗಾರಿಯನ್ನು ಮೆ॥ ಚೈತ್ರಾ ಸಿವಿಲ್ ವೆಂಚರ್ಸ್, ಬೆಂಗಳೂರು ಇವರಿಗೆ ವಹಿಸಲಾಗಿದೆ. |

| | | |
|---|---|---|
| ಇ) | ಈ ಕಾಮಗಾರಿ ಈಗ ಯಾವ ಹಂತದಲ್ಲಿದೆ; ಯಾವಾಗ ಪೂರ್ಣಗೊಳ್ಳುವುದು; ಪೂರ್ಣಗೊಳಿಸಲು ನೀಡಿರುವ ಅಂತಿಮ ಗಡುವು ಯಾವುದು? (ವಿವರ ನೀಡುವುದು) | ಮಡಿಕೇರಿ ನಗರದಲ್ಲಿ ಒಳಚರಂಡಿ ಯೋಜನೆಯಡಿ ಸೀವರ್ ಕೊಳವೆ, ಏರು ಕೊಳವೆ ಹಾಗೂ ಔಟ್-ಫಾಲ್ ಕೊಳವೆ ಮಾರ್ಗಗಳ ಅಳವಡಿಕೆ, ಒಳಚರಂಡಿ ಗೃಹ ಸಂಪರ್ಕ ಕಲ್ಪಿಸುವುದು, ಮ್ಯಾನ್‌ಹೋಲ್, ವೆಟ್‌ವೆಲ್ ಹಾಗೂ ಸೆಪ್ಟಿಕ್ ಟ್ಯಾಂಕ್‌ಗಳ ನಿರ್ಮಾಣ ಪ್ಯಾಕೇಜ್-1 ಕಾಮಗಾರಿಗಳ ಪ್ರಗತಿಯ ವಿವರ ಈ ಕೆಳಗಿನಂತಿದೆ: |

| ಕ್ರ.ಸಂ | ವಿವರ | ಒಟ್ಟು | ಪ್ರಗತಿ |
|---|---|---|---|
| 1. | ಮ್ಯಾನ್ ಹೋಲ್ (ಸಂಖ್ಯೆ) | 4134 | 2431 |
| 2. | ಸೀವರ್ ಕೊಳವೆ ಮಾರ್ಗ (ಕಿ.ಮೀ) | 112.00 | 68.50 |
| 3. | ಗೃಹ ಸಂಪರ್ಕ (ಸಂಖ್ಯೆ) | 7373 | 3400 |

ಈ ಯೋಜನೆಯ ವಿವಿಧ ಘಟಕಗಳಿಗೆ ಅವಶ್ಯವಿರುವ 4.19 ಎಕರೆ ಜಮೀನು ಇದುವರೆಗೂ ನಗರಸಭೆ, ಮಡಿಕೇರಿ ವತಿಯಿಂದ ಮಂಡಳಿಗೆ ಹಸ್ತಾಂತರವಾಗಿರುವುದಿಲ್ಲ. ಈ ಜಮೀನು ಮಂಡಳಿಗೆ ಹಸ್ತಾಂತರವಾದ ನಂತರ ಮಳೆಗಾಲ ಹೊರತುಪಡಿಸಿ 12 ತಿಂಗಳಲ್ಲಿ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು.

**ಸಂಖ್ಯೆ: ನಅಇ 31 ಯುಎಂಎಸ್ 2020**

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಸಚಿವರು